ಶ್ರೀ

ಶ್ರೀಮಚ್ಛಂಕರ ಭಗವತ್ಪಾದಪೂಜ್ಯತತ್ಛಿಷ್ಯ ವಿರಚಿತ

# ದ್ವಾದಶ, ಚತುರ್ದಶಮಂಜರಿಕಾ ಸ್ತೋತ್ರವು.

ಬೆಂಗಳೂರು ಕೋಟೆ ವಾಸಸ್ಥರಾದ

ಶಾಮಾಶಾಸ್ತ್ರಿಗಳವರಿಂದ

ಕನ್ನಡದಲ್ಲಿ ಟೀಕಿಸಲ್ಪಟ್ಟು,

ಕಂ॥ ಸುಬ್ರಹ್ಮಣ್ಯಾವಧಾನಿಗಳಿಗೆ

ಕೊಡಲ್ಪಟ್ಟಿತು.

ಬೆಂಗಳೂರು;

ವೆಸ್ಲಿಯನ್ ಮಿಶನ್ ಪ್ರೆಸ್‌ನಲ್ಲಿ ಗಾಂಟ್ ಧೊರೆಯಿಂದ ಛಾಪಿಸಿತು.

೧೮೭೧.

ಈ ಪುಸ್ತಕವು—ಬೆಂಗಳೂರಲ್ಲಿರುವ ಮೈಸೂರು ಬುಕ್ ಡಿಪೊ, ಯೇಜಂಟ—ಅಂಡ್,—ಪಬ್ಲಿಷರ್, ವೆಲನಾಡು ಬಿ ಸುಬ್ಬೈಯ್ಯನವರಲ್ಲಿ ಶಿಕ್ಕುತ್ತದೆ.

ಕ್ರಯ ೨ ಆಣೆಗಳು.

ಶ್ರೀರಸ್ತು.

# ಶ್ರೀಗೋವಿಂದ ದ್ವಾದಶ ಮಂಜರಿಕಾ ಸ್ತೋತ್ರವು.



ಶ್ಲೋ ॥ ಭಜಗೊವಿಂದಂಭಜಗೊವಿಂದಂಭಜಗೊವಿಂದಂ
ಮೂಢಮತೆ । ಸಂಪ್ರಾಪ್ತೆಸನ್ನಿಹಿತೆಕಾಲೆ ನಹಿನಹಿರಕ್ಷತಿ
ಡುಕೃಇಕರಣೆ ॥

ಟೀ॥ ಮೂಢಮತೆ—ಮೂಢೆ—ಅಜ್ಞಾನದಿಂದ ಮಾಡ ತಕ್ಕದ್ದನ್ನ ತಿಳಿಯದ, ಮತೆ—ಬುದ್ಧಿಯುಳ್ಳ ಮನುಷ್ಯನೇ, ಸನ್ನಿಹಿತೆ ಕಾಲೆ—ಅಂತ್ಯ ಕಾಲವು, ಸಂಪ್ರಾಪ್ತೆ ಸತಿ—ಸಮೀಪವಾಗಲೀಕಾಗಿ, ಡುಕೃಇಕರಣೆ—ಡುಕೃಇಕರಣೆ ಎಂಬ ವ್ಯಾಕರಣ ಶಾಸ್ತ್ರದಲ್ಲಿ ಇರುವ ಮಾತು, ನಹಿನಹಿರಕ್ಷತಿ—ಎಷ್ಟುಮಾತ್ರವೂ ರಕ್ಷಿಸಲಾರದು. ಆದ್ದರಿಂದ, ಗೊವಿಂದಂ—ಶ್ರೀಮನ್ನಾರಾಯಣ ಮೂರ್ತಿಯನ್ನ, ಭಜ—ಸೇವಿಸು. ಈ ಶ್ಲೋಕವು ಪ್ರತಿ ಶ್ಲೋಕಾಂತದಲ್ಲಿ ಪಲ್ಲವಿಯಾಗಿ ಪಠನೆ ಮಾಡ ಬೇಕು.

ಶ್ಲೋ॥ ಮೂಢಜಹೀಹಿಧನಾಗಮತೃಷ್ಣಾಂಕುರುಸದ್ಬುದ್ಧಿಂ
ಮನಸಿವಿತೃಷ್ಣಾಂ । ಯಲ್ಲಭಸೆನಿಜಕರ್ಮೋಪಾತ್ತಂವಿತ್ತಂ
ತೆನವಿನೊದಯಚಿತ್ತಂ ॥ ॥ ೧ ॥

ಟೀ॥ ಮೂಢ—ಎಲೇ ತಿಳುವಳಿಕೆ ಇಲ್ಲದ ಮನುಷ್ಯನೇ, ಧನಾಗಮತೃಷ್ಣಾಂ—ಧನ—ಹಣಗಳ, ಆಗಮ—ಬರುವದಕ್ಕಾಗಿ ಉಂಟಾದ, ತೃಷ್ಣಾಂ—ಅತ್ಯಾಶೆಯನ್ನ, ಜಹೀಹಿ—ಬಿಡು, ವಿತೃಷ್ಣಾಂ—ಅತ್ಯಾಶೆಯ ದೆಶೆಯಿಂದ ನಿವರ್ತಿಸಲ್ಪಟ್ಟ, ಸದ್ಬುದ್ಧಿಂ—ಉತ್ತಮವಾದ ತಿಳುವಳಿಕೆಯನ್ನ, ಮನಸಿ—ಹೃದಯದಲ್ಲಿ, ಕುರು—ಅಭ್ಯಾಸವಂ ಮಾಡು. ನಿಜಕರ್ಮೋಪಾ

ತ್ತಂ—ನಿಜ—ತನ್ನ ಕುಲಾಚಾರ ವಿಹಿತವಾದ, ಕರ್ಮ—ಕೃತ್ಯ ದಿಂದ, ಉಪಾತ್ತಂ—ಸಂಪಾದಿಸಲ್ಪಟ್ಟ, ಯತ್ವಿತ್ತಂ—ಯಾವ ದ್ರವ್ಯವನ್ನು, ಲಭಸೆ—ಹೊಂದುತ್ತೀಯೋ, ತೇನ—ಆ ದ್ರವ್ಯದಿಂ ದ, ಚಿತ್ತಂ—ಮನಸ್ಸನ್ನು, ವಿನೋದಯ—ಸಂತೋಷ ಪಡಿಸು.

ಶ್ಲೋ ॥ ನಾರೀಸ್ತನಭರನಾಭೀದೇಶಂದೃಷ್ಟ್ವಾಮಾಗಾಮೊ
ಹಾವೇಶಂ । ಏತನ್ಮಾಂಸವಸಾದಿವಿಕಾರಂಮನಸಿವಿಚಿಂತಯ
ವಾರಂವಾರಂ ॥ ॥ ೨ ॥

ಟೀ॥ ನಾರೀಸ್ತನಭರನಾಭೀದೇಶಂ—ನಾರೀ—ಸ್ತ್ರೀಯರಗಳ, ಸ್ತ ನ—ಕುಚಗಳ, ಭರ—ಉತ್ಕೃಷ್ಟ ಸಹಿತವಾದ, ನಾಭೀ ದೇಶಂ—ಹೊಕ್ಕಳ ಪ್ರದೇಶವನ್ನು, ದೃಷ್ಟ್ವಾ—ನೋಡಿ, ಮೋಹಾ ವೇಶಂ—ಅಜ್ಞಾನ ವಿಕಾರವನ್ನು, ಮಾಗಾಃ—ಹೊಂದ ಬ್ಯಾಡ, ಮಾಂಸವಸಾದಿವಿಕಾರಂ—ಮಾಂಸ-ಮಾಂಸವು, ವಸಾ—ಕೊ ಬ್ಬು, ಆದಿ—ಮೊದಲಾದ, ವಿಕಾರಂ—ವಿಕಾರವಾಗಿರುವ, ಏತತ್—ಈ ಸ್ತನಭರನಾಭೀಪ್ರದೇಶವನ್ನು, ಮನಸಿ—ಹೃದಯ ದಲ್ಲಿ, ವಾರಂವಾರಂ—ಬಾರಿ ಬಾರಿಗೂ, ವಿಚಿಂತಯ—ಅಸಹ್ಯ ವಾಗಿ ಎಣಿಸಿಕೋ.

ಶ್ಲೋ॥ ನಳಿನೀದಳಗತಜಲಮತಿತರಳಂತದ್ವಜ್ಜೀವಿತಮತಿ
ಶಯಚಪಲಂ । ವಿದ್ಧಿವ್ಯಾಧ್ಯಭಿಮಾನಗ್ರಹಸ್ತಂಲೋಕಂ
ಶೋಕಹತಂಚಸಮಸ್ತಂ ॥ ॥ ೩ ॥

ಟೀ॥ ನಳಿನೀದಳಗತಜಲಂ—ನಳಿನೀ—ತಾವರೇ ಬಳ್ಳಿಯ, ದಳ—ಯಲೆಯನ್ನು; ಗತ—ಹೊಂದಿದ, ಜಲಂ—ಉದಕವು, ಅತಿತರಳಂ—ಅತ್ಯಂತ ಚಂಚಲವಾದದ್ದು, ತದ್ವತ್—ಹಾಗೆ ಯೇ, ಜೀವಿತಂ—ಪ್ರಾಣವು, ಅತಿಶಯಚಪಲಂ—ಅತ್ಯಂತ ಚಪಲವಾದದ್ದು, ಸಮಸ್ತಂ—ಸಕಲವಾದ, ಲೋಕಂ—ಜನಸ ಮೂಹವನ್ನು, ವ್ಯಾಧ್ಯಭಿಮಾನಗ್ರಹಸ್ತಂ—ವ್ಯಾಧಿ—ರೋಗಗ ಳಿಂದ, ಅಭಿಮಾನ—ಅಹಂಕಾರದಿಂದ, ಗ್ರಸ್ತಂ—ಗ್ರಹಿಸಿದಂ

ಥಾದ್ದನ್ನಾಗಿ, ಶೋಕಹತಂ—ಶೋಕ—ವ್ಯಸನದಿಂದ, ಹತಂ—ಹೊಡೆಯಲ್ಪಟ್ಟಂಥಾದ್ದನ್ನಾಗಿ, ವಿದ್ಧಿ—ತಿಳೀ.

ಶ್ಲೋ॥ ಯಾವದ್ವಿತ್ತೋಪಾರ್ಜನಸಕ್ತಸ್ತಾವನ್ನಿಜಪರಿವಾರೋರಕ್ತಃ। ಪಶ್ಚಾಜ್ಜೀವತಿಜರ್ಝರದೆಹೆ ವಾರ್ತಾಂಕೊಪಿ ನಪೃಚ್ಛತಿಗೆಹೆ ॥ ॥ ೪ ॥

ಟೀ॥ ಯಾವತ್—ಯಷ್ಟರವರಿಗೂ, ವಿತ್ತೋಪಾರ್ಜನಸಕ್ತಃ—ವಿತ್ತ—ದ್ರವ್ಯವನ್ನು, ಉಪಾರ್ಜನ—ಸಂಪಾದಿಸುವದರಲ್ಲಿ, ಸಕ್ತಃ—ಆಸಕ್ತನಾಗಿ ಇದ್ದಾನೋ, ತಾವತ್—ಅಷ್ಟು ಪರ್ಯಂತವೂ, ನಿಜಪರಿವಾರಃ—ನಿಜ—ಸ್ವಕೀಯವಾದ, ಪರಿವಾರಃ—ಹೆಂಡತಿ ಮಕ್ಕಳು ಮೊದಲಾದ ಪರಿಜನವು, ರಕ್ತಃ—ವಿಶ್ವಾಸ ಉಂಟಾದಂಥಾದ್ದಾಗಿ ಇರುತ್ತದೆ, ಪಶ್ಚಾತ್—ಆರ್ಜನ ಕಾಲದ ತರುವಾಯ, ಜರ್ಝರದೆಹೆ—ಜರ್ಝರ-ವ್ಯಾಧಿ ಮೊದಲಾದದ್ದರಿಂದ ಶಿಥಿಲವನ್ನು ಹೊಂದಿದ, ದೆಹೆ—ಶರೀರವು, ಜೀವತಿಸತಿ—ಪ್ರಾಣ ಉಂಟಾದ್ದಾಗಿರಲೀಕಾಗಿ, ಕೊಪಿ—ಒಬ್ಬನೂ ಕೂಡಾ, ವಾರ್ತಾಂ—ಕ್ಷೇಮಲಾಭವನ್ನು, ಗೆಹೆ—ಮನೆಯಲ್ಲಿ, ನಪೃಚ್ಛತಿ—ವಿಚಾರಿಸನು.

ಶ್ಲೋ॥ ಯಾವತ್ಪವನೊನಿವಸತಿದೆಹೆತಾವತ್ಪೃಚ್ಛತಿಕುಶಲಂಗೆಹೆ। ಗತವತಿವಾಯೌದೆಹಾಪಾಯೆಭಾರ್ಯಾಬಿಭ್ಯತಿತಸ್ಮಿನ್ಕಾಯೆ॥ ॥ ೫ ॥

ಟೀ॥ ಯಾವತ್—ಯಷ್ಟು ಕಾಲದವರಿಗೂ, ಪವನಃ—ಪ್ರಾಣವಾಯುವು, ದೆಹೆ—ಶರೀರದಲ್ಲಿ, ನಿವಸತಿ—ಇರುತ್ತೋ, ತಾವತ್—ಅದುವರಿಗೂ, ಗೆಹೆ—ಮನೆಯಲ್ಲಿ, ಕುಶಲಂ—ಕ್ಷೇಮವಾರ್ತೆಯನ್ನು, ಪೃಚ್ಛತಿ—ತಾಯಿ ಮೊದಲಾದವರು ಕೇಳುತ್ತಾರೆ, ವಾಯೌ—ಪ್ರಾಣವಾಯುವು, ಗತವತಿಸತಿ—ಹೋಗಲಾಗಿ, ದೇಹಾಪಾಯೆ—ದೆಹ—ಶರೀರದ, ಅಪಾಯೆಸತಿ—ಹಾನಿ ಉಳ್ಳದ್ದಾಗಲಾಗಿ, ಭಾರ್ಯಾ—ಹೆಂಡತಿಗಳು, ತಸ್ಮಿನ್ಕಾಯೆ—

ಪ್ರಾಣವಿಲ್ಲದ ಹೆಣದ ವಿಷಯವಾಗಿ, ಬಿಭ್ಯತಿ–ಭಯವನ ಹೊಂದುತ್ತಾರೆ.

ಶ್ಲೋ॥ ಅರ್ಥಮನರ್ಥಂಭಾವಯನಿತ್ಯಂನಾಸ್ತಿ ತತಸ್ಸುಖ ಲೇಶಸ್ಸತ್ಯಂ । ಪುತ್ರಾದಪಿಧನಭಾಜಾಂಭೀತಿಸ್ಸರ್ವತ್ರೈಷಾ ವಿಹಿತಾರೀತಿಃ ॥ ॥ ೬ ॥

ಟೀ॥ ಅರ್ಥಂ–ಹಣ ಮೊದಲಾದದ್ದರನ್ನ, ಅನರ್ಥಂ–ವಿಪತ್ತನ್ನ ಮಾಡುವಂಥಾದ್ದನ್ನಾಗಿ, ನಿತ್ಯಂ–ನಿರಂತರವು, ಭಾವಯ–ನಿಶ್ಚಯವಾಗಿತಿಳೀ, ತತಃ–ಆ ದ್ರವ್ಯದ್ದೆಶೆಯಿಂದ, ಸುಖಲೇಶಃ–ದುಃಖ ಸಂಬಂಧವಿಲ್ಲದ ಆನಂದದ, ಲೇಶಃ–ಅಲ್ಪಾಂಶವಾದರೂ, ನಾಸ್ತಿ–ಇಲ್ಲ, ಸತ್ಯಂ–ನಿಶ್ಚಯವು. ಅದು ಹ್ಯಾಗಂದರೆ, ಧನಭಾಜಾಂ–ಧನ–ಹಣವನ್ನ, ಭಾಜಾಂ–ಹೊಂದಿದ ಧನಾಢ್ಯರಿಗೆ, ಪುತ್ರಾದಪಿ–ಅತ್ಯಂತ ಪ್ರೇಮಾಸ್ಪದವಾದ ಪುತ್ರನ ದೆಶೆಯಿಂದಲೂ ಕೂಡಾ, ಭೀತಿಃ–ಭಯವು, ಜಾಯತೆ–ಉಂಟಾಗುತ್ತದೆ, ಏಷಾ–ಈ ಮೇಲೆ ಹೇಳಿದಂಥಾ, ರೀತಿಃ–ಸರ್ವ ಜನಾನುಭವ ಪದ್ಧತಿಯು, ಸರ್ವತ್ರ–ಯಲ್ಲಾ ಕಡೆಯೂ, ವಿಹಿತಾ–ಯೇರ್ಪಟ್ಟು ಇಧೆ–

ಶ್ಲೋ॥ ಬಾಲಸ್ತಾವತ್ಕ್ರೀಡಾಸಕ್ತಸ್ತರುಣಸ್ತಾವತ್ತರುಣೀ ಸಕ್ತಃ । ವೃದ್ಧಸ್ತಾವಚ್ಚಿಂತಾಸಕ್ತಃಪರೇಬ್ರಹ್ಮಣಿಕೋಪಿ ನಸಕ್ತಃ ॥ ॥ ೭ ॥

ಟೀ॥ ಬಾಲಸ್ತಾವತ್–ಚಿಕ್ಕವನಾಗಿ ಇರುವಾಗ, ಕ್ರೀಡಾಸಕ್ತಃ–ಕ್ರೀಡಾ–ಆಟಗಳಲ್ಲಿ, ಆಸಕ್ತಃ–ಆಸಕ್ತಿಯನ್ನ ಹೊಂದಿದವನು, ಭವತಿ–ಆಗುತ್ತಾನೆ, ತರುಣಸ್ತಾವತ್–ಪ್ರಾಯದವನಾಗಿ ಇರುವಾಗ, ತರುಣೀಸಕ್ತಃ–ತರುಣೀ–ವಯಸ್ಸುವುಳ್ಳ ಸ್ತ್ರೀರಗಳಲ್ಲಿ, ಸಕ್ತಃ–ಆಸಕ್ತಿವುಳ್ಳವನು, ಭವತಿ–ಆಗುತ್ತಾನೆ, ವೃದ್ಧಸ್ತಾವತ್–ಮುದಕನಾಗಿ, ಚಿಂತಾಸಕ್ತಃ–ಚಿಂತಾ–ಪುತ್ರಮಿತ್ರ ಕಳತ್ರಾದಿಗಳಲ್ಲಿ ವುಂಟಾದ

ಮನೋವ್ಯಾಕುಲ ರೂಪವಾದ ವ್ಯಸನದಲ್ಲಿ, ಆಸಕ್ತಃ-ಅಭಿಲಾಷೆ ಹೊಂದಿದವನಾಗಿ, ಭವತಿ-ಆಗುತ್ತಾನೆ, ಕೋಪಿ-ಮೂರವಸ್ಥೆಗಳಲ್ಲಿ ಇರುವ ಯಾವ ಮನುಷ್ಯನು, ಪರೇ-ಸರ್ವೋತ್ತಮನಾದ, ಬ್ರಂಹ್ಮಣಿ-ಸರ್ವ ವ್ಯಾಪಕನಾದ ಶ್ರೀಮನ್ನಾರಾಯಣ ಮೂರ್ತಿ ವಿಷಯವಾಗಿ, ಸಕ್ತಃ-ಮನೋವಾಕ್ಕಾಯಗಳಿಂದ, ಧ್ಯಾನ ಭಜನ ವಂದನಾದಿ ಕ್ರಿಯಗಳನ್ನ ಮಾಡುವ ಅತಿ ಭಕ್ತಿವುಳ್ಳವನು, ನಭವತಿ-ಆಗನು.

ಶ್ಲೋ॥ ಕಾತೇಕಾಂತಾಕಸ್ತೆಪುತ್ರಸ್ಸಂಸಾರೋಯಮತೀವವಿ
ಚಿತ್ರಃ । ಕಸ್ಯತ್ವಂವಾಕುತಆಯಾತಃತತ್ವಂಚಿಂತಯತ
ದಿಹಭ್ರಾಂತಃ ॥ ॥ ೮ ॥

ಟೀ॥ ಎಲೈ ತಿಳುವಳಿಕೆ ಇಲ್ಲದ ಮನುಷ್ಯನೇ, ತೇ-ನಿನ್ನ, ಪುತ್ರಃ-ನಿನ್ನ ಸಂರಕ್ಷಣೆ ಮಾಡತಕ್ಕ ಪ್ರೇಮಾಸ್ಪದವಾದ ಮಗನು, ಕಃ-ಹುಟ್ಟುವದಕ್ಕೆ ಮುಂಚಿತವಾಗಿ ಯಾವನು, ತ್ವಂವಾ-ಸಮಸ್ತ ಸುಖದುಃಖಗಳನ್ನ ಅನುಭವಿಸುವ ನೀನು, ಕಸ್ಯ-ನೀನು ಹುಟ್ಟುವದಕ್ಕೆ ತತ್ಪೂರ್ವದಲ್ಲಿ ಯಾರವನು, ಕುತಃ-ನಿನ್ನ ತಾಯಿ ತಂದೆಗಳು ನಿನ್ನ ಹಾಗೆಯೆ ಯಿರುವಾಗ ಯಾವ ಸ್ಥಳಗಲ್ಲಿ ಯಿದ್ದು, ಆಯಾತಃ-ಬಂದೆ. ಅಯಂ-ಈ ಮೇಲೆ ಹೇಳಿದೋಪಾದಿಯಲ್ಲಿ ಪ್ರಸಿದ್ಧವಾದ, ಸಂಸಾರಃ-ಅವಕಾಶವಿಲ್ಲದೆ-ವುತ್ಪತ್ತಿ ನಾಶಗಳನ್ನ ಹೊಂದುವ ಕುಲಾಲ ಚಕ್ರದೋಪಾದಿಯಲ್ಲಿ ಸುತ್ತುತ್ತಾ ಯಿರುವ, ಈ ಅನಾದಿ ಸಂಸಾರವೂ, ಅತೀವ-ಅತ್ಯಂತವಾಗಿ, ವಿಚಿತ್ರಃ-ಮೇಲೆ ಹೇಳಿದೋಪಾದಿಯಲ್ಲಿ, ಮೂಲವನ್ನ ವಿಚಾರಿಸದೆ ಆಶ್ಚರ್ಯಕರವಾಗಿ ಯಿಧೆ, ತತ್-ಆ ಹೇತುವಿನ ದೆಶೆಯಿಂದ, ಇಹ-ಈ ಮೂಲ ವಿಚಾರಣೆ ಮಾಡದೆ ಯಿರುವ ವಿಷಯದಲ್ಲಿ, ತ್ವಂ-ನೀನು, ಭ್ರಾಂತಃ-ಮೇಲೆ ಹೇಳಿದ, ಕಾಂತಾ ಪುತ್ರಾದಿಗಳು

ಸತ್ಯವೆಂದು ನಂಬುವದರಿಂದ, ಭ್ರಾಂತಿಯನ್ನ ಹೊಂದಿ ಇ ದ್ದೀ, ತತ್ವಂ-ಪರಮಾರ್ಥವನ್ನ, ಚಿಂತಯ—ವೇದಾಂತಶ್ರವಣ ಮನನಾದಿಗಳಿಂದ ಸ್ವಾನುಭವಕ್ಕೆ ತೆಗದುಕೋ.

ಶ್ಲೊ ॥ ಸತ್ಸಂಗತ್ವೇನಿಸ್ಸಂಗತ್ವಂನಿಸ್ಸಂಗತ್ವೇನಿರ್ಮೋಹತ್ವಂ।
ನಿರ್ಮೋಹತ್ವೇನಿಶ್ಚಲತತ್ವಂನಿಶ್ಚಲತತ್ವೇಜೀವನ್ಮುಕ್ತಿಃ॥ ॥೯॥

ಟೀ॥ ಸತ್ಸಂಗತ್ವೇ ಸತಿ-ಸತ್-ವೇದಾಂತಶ್ರವಣ ಮನನಾದಿಗಳ ದೆಶೆಯಿಂದ ಪರಿಶುದ್ಧಾಂತರಂಗಿಗಳಾದ ಮಹಾತ್ಮರುಗಳ, ಸಂ ಗತ್ವೇ ಸತಿ—ಸಹವಾಸ ಉಳ್ಳದ್ದಾಗಲಾಗಿ, ನಿಸ್ಸಂಗತ್ವಂ—ಪುತ್ರ ಮಿತ್ರ ಕಳತ್ರಾದಿಗಳಲ್ಲಿ ವಿಶೇಷಾಭಿಲಾಷೆ ಯಿಲ್ಲದೇ ಇರೋಣಾತನ, (ಅಂದರೆ) ಜನರೊಡನೆ ಯಿಲ್ಲದೆ ಯಿರೋ ಣವು, ಪ್ರಾಪ್ಯತೆ—ಹೊಂದಲ್ಪಡುತ್ತದೆ, ನಿಸ್ಸಂಗತ್ವೇ ಸತಿ—ಜನಸಾಂಗತ್ಯವಿಲ್ಲದೆ ಹೋಗಲಾಗಿ, ನಿರ್ಮೋಹತ್ವಂ—ಧನಾ ದಿಗಳಲ್ಲಿ ಉಂಟಾಗುವ ಅತ್ಯಂತಾಭಿಮಾನವನ್ನ ಹೊಂದದೆ, ಯಿರೋಣವು, ಪ್ರಾಪ್ಯತೆ—ಹೊಂದಲ್ಪಡುತ್ತದೆ, ನಿರ್ಮೋಹ ತ್ವೇ ಸತಿ—ಹಾಗೆ ದಾರಾಪತ್ಯಾದಿಗಳಲ್ಲಿ ಮೋಹವನ್ನ ಬಿಟ್ಟವ ನಾಗಲಾಗಿ, ನಿಶ್ಚಲತತ್ವಂ—ವಿಷಯ ರಹಿತನಾದ್ದರಿಂದ ನಿರ್ಮ ಲ ಜ್ಞಾನವು, ಪ್ರಾಪ್ಯತೆ—ಹೊಂದಲ್ಪಡುತ್ತದೆ, ನಿಶ್ಚಲತತ್ವೇ ಸತಿ—ಅಂಥಾ ನಿರ್ಮಲ ಜ್ಞಾನ ಉಳ್ಳವನಾಗಲಾಗಿ, ಜೀವನ್ಮು ಕ್ತಿಃ—ಅಂಥಾವನಿಗೆ, ಸರ್ವಸಂಗ ನಿರ್ಮುಕ್ತಿ ಉಂಟಾಗುವ ದೆಶೆ ಯಿಂದ, ಜೀವನ್ಮುಕ್ತಿ ಸ್ಥಾನವು, ಪ್ರಾಪ್ಯತೆ—ಹೊಂದಲ್ಪ ಡುತ್ತದೆ.

ಶ್ಲೊ॥ ವಯಸಿಗತೆಕಃಕಾಮವಿಕಾರಃಶುಷ್ಕೇನೀರೆಕಃಕಾಸಾರಃ।
ಕ್ಷೀಣೆವಿತ್ತೆಕಃಪರಿವಾರಃಜ್ಞಾತೆತತ್ವೇಕಸ್ಸಂಸಾರಃ ॥ ॥ ೧೦ ॥

ಟೀ॥ ವಯಸಿ—ಪ್ರಾಯವು, ಗತೆ ಸತಿ—ಹೋಗಲಾಗಿ, ಕಾಮ ವಿಕಾರಃ—ಕಾಮ—ಮನ್ಮಥನ ದೆಶೆಯಿಂದ ಹುಟ್ಟುವ, ವಿಕಾ

ರಃ—ಮನೋವ್ಯಾಕುಲವು, ಕಃ—ಯಂಥಾದ್ದು, (ಅಂದರೆ) ಉಂಟಾಗಲಾರದು, ನೀರೆ—ಜಲವು, ಶುಷ್ಕೆಸತಿ—ಬಣಗಲಾಗಿ, ಕಾಸಾರಃ—ಸರಸ್ಸು, ಕಃ—ಯಂಥಾದ್ದು (ಅಂದರೆ) ಸ್ವರೂಪ ಹೀನವಾಗೋಣವು, ವಿತ್ತೆ—ದ್ರುವ್ಯವು, ಕ್ಷೀಣೆಸತಿ—ನಾಶವಾಗ ಲಾಗಿ, ಪರಿವಾರಃ—ಪುತ್ರ ಮಿತ್ರ ಕಳತ್ರ ದಾಸೀ ದಾಸಾದಿ ಪರಿಜನವು, ಕಃ—ಯಂಥಾದ್ದು, (ಅಂದರೆ) ದ್ರುವ್ಯ ಹೀನನನ್ನ ಯಲ್ಲರೂ ಬಿಡುತ್ತಾರೆಂಬೋಣವು, ತತ್ವೇ—ಪರಮಾರ್ಥ ಪರಿ ಜ್ಞಾನವು, ಜ್ಞಾತೆಸತಿ—ಸದ್ಗುರೂಪದೇಶೆದ್ದೆಸೆಯಿಂದ ತಿಳಿಯ ಲಾಗಿ ಸಂಸಾರಃ—ಅಹಂಕಾರಾದಿ ಪ್ರಪಂಚವು, ಕಃ—ಯಂಥಾ ದ್ದು, (ಅಂದರೆ) ಮುಕ್ತನಾಗುವದ್ದರಿಂದ ಸಂಸಾರ ನಾಶವು ಉಂಟಾಗುವದೆಂಬೋಣವು.

ಶ್ಲೋ॥ ಮಾಕುರುಧನಜನಯೌವನಗರ್ವಂಹರತಿನಿಮೇಷಾತ್ಕಾಲ ಸ್ಸರ್ವಂ । ಮಾಯಾಮಯಮಿದಮಖಿಲಂಹಿತ್ವಾಬ್ರಹ್ಮಪದತ್ವಂ ಪ್ರವಿಶವಿದಿತ್ವಾ ॥ ॥ ೧೧ ॥

ಟೀ॥ ಧನಜನಯೌವನಗರ್ವಂ—ಧನ—ಹಣಗಳ ದೆಶೆಯಿಂದ, ಜನ—ಪುತ್ರ ಮಿತ್ರಾದಿ ಪರಿಜನದ್ದೆಶೆಯಿಂದ, ಯೌವನ—ಪ್ರಾ ಯದ್ದೆಶೆಯಿಂದ ಉಂಟಾಗುವ, ಗರ್ವಂ—ಅಹಂಕಾರವನ್ನ, ಮಾಕುರು—ಹೊಂದಬೇಡ, (ಅಂದರೆ) ಅಸ್ಥಿರವಾದ ಭಾಗ್ಯ ಮೊದಲಾಗಿ ಉಳ್ಳವನ ದೆಶೆಯಿಂದ ಗರ್ವವನ್ನ ಬಿಡು ಯೆಂಬು ವದು. ಅದು ಹ್ಯಾಗೆಂದರೆ, ಕಾಲಃ—ಉದಯಾಸ್ತಮಯಾದಿ ವ್ಯವಹಾರದಿಂದ ವ್ಯವಹರಿಸಲ್ಪಡುವ ಕಾಲವು, ನಿಮೇಷಾತ್— ರೆಪ್ಪೆ ಹೊಡಿಯುವ ಒಳಗಾಗಿ, (ಅಂದರೆ) ಅತಿತ್ವರೆಯಾಗಿ, ಸರ್ವಂ—ಸ್ಥಿರವೆಂದು ತೋಚಿದ್ದ ಯಲ್ಲವನ್ನೂ; ಹರತಿ—ಅಪ ಹರಿಸುತ್ತದೆ (ಅಂದರೆ) ಕಾಲವಶದಿಂದ ಸಮಸ್ತವೂ ಕ್ಷಯಿಸಿ ಹೋಗುತ್ತೆಂಬೋಣವು; ಆದ್ದರಿಂದ, ಮಾಯಾಮಯಂ— ಮಾಯಾಶಕ್ತಿ ರಚಿತವಾದ, ಇದಮಖಿಲಂ—ಪರಿದೃಶ್ಯಮಾನ

ಮಾದ ಈ ಸಮಸ್ತ ಪ್ರಪಂಚವನ್ನು, ಹಿತ್ವಾ—ಬಿಟ್ಟು, ಬ್ರಹ್ಮ ಪದಂ—ಸರ್ವವ್ಯಾಪಕವಾಗಿರುವ ಪರಮಾತ್ಮ ಸ್ವರೂಪವನ್ನು, ವಿದಿತ್ವಾ—ವಿಚಾರದಿಂದ ತಿಳದುಕೊಂಡು, ಪ್ರವಿಶ—ಆತ್ಮಸ್ವ ರೂಪವನ್ನು ಹೊಂದು.

ಶ್ಲೋ॥ ದಿನಯಾಮಿನ್ಯೌಸಾಯಂಪ್ರಾತಶ್ಶಿಶಿರವಸಂತೌ ಪುನರಾಯಾತಃ। ಕಾಲಃಕ್ರೀಡತಿಗಚ್ಛತ್ಯಾಯುಸ್ತದಪಿನಮುಂ ಚತ್ಯಾಶಾವಾಯುಃ॥ ॥೧೨॥

ಟೀ॥ ದಿನಯಾಮಿನ್ಯೌ—ದಿವಾರಾತ್ರಿಗಳು, ಸಾಯಂಪ್ರಾತಃ—ಉದಯಾಸ್ತಮಯಗಳು, ಶಿಶಿರವಸಂತೌ—ಶಿಶಿರ ವಸಂತ ರುತುಗಳು, ಪುನಃ—ಒಂದರ ಹಿಂದೆ ಒಂದು ಎಡಬಿಡದೆ, ಆಯಾತಃ—ಬರುತ್ತವೆ, ಏವಂ—ಈ ಪ್ರಕಾರವು, ಕಾಲಃ—ಮೇಲೆ ಹೇಳಿದ ದಿವಾರಾತ್ರಿಗಳು ಮೊದಲಾದ್ದರಿಂದ ವ್ಯವಹರಿಸಲ್ಪಡುವ ಕಾಲವು, ಕ್ರೀಡತಿ—ಬಾಲರು ವಿನೋದವಾಗಿ ಧೊರೆ ಮಂತ್ರಿ ಮೊದಲಾದ ಮಿಥ್ಯಾನಾಮಧೇಯಗಳನ್ನು ವಹಿಸಿಕೊಂಡು ಆಟ ಆಡುವ ರೀತಿಯಾಗಿ ಕಾಲವು ಆಡುತ್ತದೆ. ಆಯುಃ—ಆಯುಸ್ಸು, ಗಚ್ಛತಿ—ಹೋಗುತ್ತದೆ, ತದಪಿ—ಮೇಲೆ ಹೇಳಿದಕಾಲ ಸ್ವರೂಪವನ್ನು ಚನ್ನಾಗಿ ವಿಚಾರಿಸಿ ತಿಳದುಕೊಂಡಾಗ್ಯೂ, ಆಶಾವಾಯುಃ—ಘಾಳಿಯೋಪಾದಿಯಲ್ಲಿ ಸ್ವರೂಪವಿಲ್ಲದ ಯಲ್ಲಾ ಕಡಿಗೂ ವ್ಯಾಪಿಸುವ ದುರಾಶೆಯು, ಪುರುಷಂ—ಮನುಷ್ಯನನ್ನು, ನಮುಂಚತಿ—ಬಿಡುವದಿಲ್ಲ.

ಶ್ಲೋ॥ ದ್ವಾದಶಮಂಜರಿಕಾಭಿರಶೇಷಃಕಥಿತೊವೈಯಾಕ ಕರಣಸ್ಯೈಷಃ। ಉಪದೇಶೊಭೂದ್ವಿದ್ಯಾನಿಪುಣೈಶ್ರೀಮ ಚ್ಛಂಕರಭಗವಚ್ಛರಣೈಃ॥ ॥೧೩॥

ಟೀ॥ ವಿದ್ಯಾನಿಪುಣೈಃ—ವಿದ್ಯಾ—ಚತುಷ್ಷಷ್ಠಿ ವಿದ್ಯೆಗಳಲ್ಲಿ ನಿಪುಣೈಃ—ಅತಿಸಮರ್ಥರಾದ, ಶ್ರೀಮಚ್ಛಂಕರ ಭಗವಚ್ಛರಣೈಃ—ಪೂಜ್ಯರಾದ ಶ್ರೀಶಂಕರಾಚಾರ್ಯರಿಂದ, ವೈಯ್ಯಾಕರಣಸ್ಯ—

ವ್ಯಾಕರಣ ಶಾಸ್ತ್ರವು ಮಾತ್ರ ವೋದಿ, ಆತ್ಮಸ್ವರೂಪಾನುಭವವಿಲ್ಲದ ಮುಮುಕ್ಷುವಾದ ವೊಬ್ಬ ಪಂಡಿತನಿಗೆ, ದ್ವಾದಶ ಮಂಜರಿಕಾಭಿಃ–ಹೂಗೊಂಚಲದೋಪಾದಿಯಲ್ಲಿ ನಿರಂತರಾನಂದಪ್ರದವಾದ, ಆತ್ಮಸ್ವರೂಪಾನುಸಂಧಾನ ಮಕರಂದವನ್ನು ಉಂಟು ಮಾಡುವದರಿಂದ, ಹೂಗೊಂಚಲದೊಡನೆ ಸಮಾನವಾದ ಹನ್ನೆರಡು ಮಂಜರಿಕಾವೃತ್ತಗಳಿಂದ, ಏಷಃ–ಈ ಮುಂದೆ ಹೇಳಲ್ಪಟ್ಟ ಉಪದೇಶವು ಅನೇಕ ಸಂವತ್ಸರಾಧ್ಯಯನ ಸಾಧ್ಯವಾದ ವಿಷಯಗಳನ್ನು, ಸ್ವಮಹಿಮೆಯಿಂದ–ಅತ್ಯಲ್ಪ ಕಾಲದಿಂದ ತಿಳಿ ಹೇಳುವ ವಿಷಯವು, ಕಥಿತಃ–ಹೇಳಲ್ಪಟ್ಟದ್ದಾಗಿ–ಅಭೂತ್–ಆಯಿತು.

ಇತಿಶ್ರೀಗುರುಶಂಕರವಿಜಯೆ ಶ್ರೀಮಚ್ಛಂಕರಾಚಾರ್ಯವೈಯಾಕರಣಸಂ
ವಾದೆ ಪರಮಹಂಸಪರಿವ್ರಾಜಿಕಾಚಾರ್ಯವರ್ಯ ಶ್ರೀಮಚ್ಛಂಕರಾಚಾ
ರ್ಯೋಪದಿಷ್ಟ ದ್ವಾದಶಮಂಜರಿಕಾಸ್ತೋತ್ರಂ ಸಮಾಪ್ತ.



ಶ್ರೀಮಚ್ಛಂಕರ ಭಗವತ್ಪಾದ ಶಿಷ್ಯೋಪದಿಷ್ಟ

## ಚತುರ್ದಶಮಂಜರಿಕಾಸ್ತೋತ್ರಮಾರಭ್ಯತೆ.



॥ ಪದ್ಮಪಾದಃ ॥

ಶ್ಲೋ ॥ ಕಾತೆಕಾಂತಾಧನಗತಚಿಂತಾವಾತುಲಕಿಂತವನಾಸ್ತಿ
ನಿಯಂತಾ । ತ್ರಿಜಗತಿಸಜ್ಜನಸಂಗತಿರೆಕಾಭವತಿಭವಾರ್ಣವ
ತರಣೆನೌಕಾ ॥ ॥ ೧ ॥

ಟೀ॥ ವಾತುಲ–ಎಲೇ ಹುಚ್ಚನೇ, ಕಾ–ಯಂಥಾದ್ದಾದಂಥಾ, ಧನಗತಚಿಂತಾ–ದ್ರವ್ಯದಿಂದ ಶೇರಿದ ವಿಚಾರವು, ತೆ–ನಿನಗೆ,

ಕಾಂತಾ—ಇಷ್ಟವಾದದ್ದು, (ಅಂದರೆ) ಧನವಿಷಯೇಚ್ಛೆಯು ವ್ಯಸನಕರವಾದ್ದು, ತವ—ನಿನಗೆ, ನಿಯಂತಾ—ಸದುಪದೇಶದ್ದ ಶೆಯಿಂದ ಕಾರ್ಯಾಕಾರ್ಯಗಳನ್ನ ತಿಳ ಹೇಳಿ ಶಿಕ್ಷಿಸುವಾತನು, ನಾಸ್ತಿಕಿಂ—ಇಲ್ಲವೆಯೇನು? ತ್ರಿಜಗತಿ—ಮೂರುಲೋಕಗಳ ಲ್ಲಿ, ಏಕಾ—ಮುಖ್ಯವಾದಂಥಾ, ಸಜ್ಜನಸಂಗತಿಃ—ಸತ್ಪುರು ಷರ ಸಹವಾಸ ಮಾತ್ರವೆ, ಭವಾರ್ಣವತರಣೆ—ಸಂಸಾರ ಸಾಗರವನ್ನ ದಾಟುವದರಲ್ಲಿ, ನೌಕ—ನಾವೆ ರೂಪವಾಗಿದ್ದು, ಭವತಿ—ಆಗುತ್ತದೆ. ಮುಕ್ತಿ ಆಗುವದಕ್ಕೆ ಸತ್ಸಹವಾಸವು ಮುಖ್ಯ ಕಾರಣವೆಂದು ಪದ್ಮಪಾದಾಚಾರ್ಯರಭಿಪ್ರಾಯವು.

॥ತಂತ್ರೋಟಕಃ ॥

ಶ್ಲೋ॥ ಜಟಿಲೊಮುಂಡೀಲುಂಛಿತಕೇಶಃಕಾಷಾಯಾಂಬರ
ಬಹುಕೃತವೇಷಃ । ಪಶ್ಯನ್ನಪಿಚನಪಶ್ಯತಿಮೂಢೊ
ಹ್ಯುದರನಿಮಿತ್ತಂಬಹುಕೃತವೇಷಃ॥ ॥೨॥

ಟೀ॥ ಕಾಷಾಯಾಂಬರಬಹುಕೃತವೇಷಃ-ಕಾಷಾಯಾಂಬರ-ಕಾವಿ ವಸ್ತ್ರಗಳಿಂದ, ಬಹುಕೃತವೇಷಃ—ದೊಡ್ಡದಾಗಿ ಮಾ ಡಲ್ಪಟ್ಟ ವೇಷವುಳ್ಳ ಸನ್ಯಾಸಿಯೂ, ಜಟಿಲೋಪಿ—ಜಟಾಧಾ ರಿಯಾದಾಗ್ಯೂ (ಅಂದರೆ) ಶೈವದೀಕ್ಷೆಯಲ್ಲಿ ವಿರಕ್ತಿ ಹೊಂ ದಿದ ಕೆಲವರು ಜಡೆಗಳನ್ನ ಧರಿಶಿಕೊಂಡು ಇದ್ದಾರೆಂಬ ಭಾ ವವು, ಮುಂಡ್ಯಪಿ—ಶಿಖೆಯನ್ನತೆಗದವನಾದಾಗ್ಯೂ (ಅಂದರೆ) ಕೆಲವರು ವಿರಕ್ತರಾಗಿ ಸನ್ಯಾಸಾಶ್ರಮವನ್ನ ಸ್ವೀಕರಿಸಿ ಕೊಂಡು ಶಿಖಾಯಜ್ಞೋಪವೀತಗಳನ್ನ ಬಿಟ್ಟು ಇದ್ದಾರೆಂಬ ಅರ್ಥವು, ಲುಂಛಿತಕೇಶೊಪಿ—ಲುಂಛಿತ—ಕತ್ತರಿಸಿ ಹಾಕಲ್ಪ ಟ್ಟ, ಕೇಶೊಪಿ—ಕೂದಲು ವುಳ್ಳವನಾದಾಗ್ಯೂ (ಅಂದರೆ) ಕಾ ಪಾಲಿಕರಲ್ಲಿ ಕೆಲವರು, ಗೋಸಾಯಿಗಳಲ್ಲಿ ಕೆಲವರು, ವಿರಕ್ತಿ ಯನ್ನ ಹೊಂದಿದ ಕಾಲದಲ್ಲಿ ಕೇಶಚ್ಛೇದನವು ಮಾಡಿಸಿಕೊ

ಳ್ಳುತ್ತಾರೆ. ಮೂಢಃ—ಸಂದೇಹಾತ್ಮನಾಗಿ, ಪಶ್ಯನ್ನಪಿ—ಆತ್ಮ ಸ್ವರೂಪಾನುಸಂಧಾನವನ್ನ ನೋಡಿದವನಾದಾಗ್ಯೂ, ನಚ ಪಶ್ಯತಿ—ಬ್ರಹ್ಮ ಸ್ವರೂಪಾನುಭವವನ್ನ ನೋಡುವದಿಲ್ಲ, ಹಿ—ಆ ಹೇತುವಿನ ದೆಸೆಯಿಂದ, ಬಹುಕೃತವೇಷಃ—ಬಹುಕೃತ—ಸ್ವೀಕರಿಸಲ್ಪಟ್ಟ, ವೇಷಃ—ಮುಂದೆ ಹೇಳಿದ ಜಟಾಧಾರಣಾದಿ ದೇಹಾಲಂಕಾರವು, ಉದರನಿಮಿತ್ತಃ—ಅಂಥಾವನಿಗೂ ಹೊಟ್ಟೆಗೋಸ್ಕರವಾದ್ದು (ಅಂದರೆ) ಗುರೂಪದಿಷ್ಟ ಮಾರ್ಗದಲ್ಲಿ ಶ್ರದ್ಧೆಯಿಲ್ಲದೆ ಸಂದೇಹಾತ್ಮನಾದವನಿಗೆ ಜಟಾಧಾರಣ ಮೊದಲಾದ ವಿರಕ್ತ ಚಿನ್ಹೆಯೂ ಉದರ ಭರಣಾರ್ಥವೆಂದು ತಂತ್ರೋಟಕಾಚಾರ್ಯಾಭಿಪ್ರಾಯವು.

॥ ಹಸ್ತಾಮಲಕಃ ॥

ಶ್ಲೋ॥ ಅಂಗಂಗಳಿತಂಪಲಿತಂಮುಂಡಂದಶನವಿಹೀನಂಜಾ
ತಂತುಂಡಂ । ವೃದ್ಧೋಯಾತಿಗೃಹೀತ್ವಾದಂಡಂತದಪಿನ
ಮುಂಚತ್ಯಾಶಾಪಿಂಡಂ॥ ॥ 3 ॥

ಟೀ॥ ಯದಾ—ಯಾವಾಗ, ಅಂಗಂ—ಶರೀರವು, ಗಳಿತಂ—ಆಯಾ ಅವಯವಗಳಲ್ಲಿ ಉಂಟಾದ ಬಲವು, ಕಮ್ಮಿ ಆದ್ದರಿಂದ ಬಲಹೀನವಾದ್ದು, ಜಾತಂ—ಆಯಿತೋ, ಮುಂಡಂ—ಶಿರಸ್ಸು, ಪಲಿತಂ—ಮುದಕತನದಿಂದ ಬಿಳೀದಾದ ಕೂದಲು ಉಳ್ಳದ್ದಾಗಿ, ಜಾತಂ—ಆಯಿತೋ, ತುಂಡಂ—ಮುಖವು (ಅಂದರೆ) ವದನದ್ವಾರವು, ದಶನವಿಹೀನಂ—ಹಲ್ಲು ಇಲ್ಲದ್ದಾಗಿ, ಜಾತಂ—ಆಯಿತೋ, ತದಾ—ಆವಾಗ, ವೃದ್ಧಃ—ಮುದುಕನು, ದಂಡಂ—ಕೋಲನ್ನ, ಗೃಹೀತ್ವಾ—ತನಗೆ ತಾನು, ನಡಿಯುವದಕ್ಕೆ ಶಕ್ತಿ ಇಲ್ಲದ್ದರಿಂದ ಪೂರಿಕೊಂಡು ನಡಿಯುವದಕ್ಕಾಗಿ ತೆಗದುಕೊಂಡು, ಯಾತಿ—ಅತ್ಯಾಶೆಯಿಂದ ಸಂಚರಿಸುತ್ತಾನೆ, ತದಪಿ—ಮೇಲೆ ಹೇಳಿದ ರೀತಿಯಿಂದ ಅಂಥಾ ದುರವಸ್ಥೆಯನ್ನ ಹೊಂದಿದಾಗ್ಯೂ, ಆಶಾ—ಪುತ್ರಮಿತ್ರ ಕಳತ್ರಗಳಲ್ಲಿ ಉಂಟಾದ

ದುರಾಶೆಯೂ, ಪಿಂಡಂ–ದೇಹವನ್ನು, ನಮುಂಚತಿ–ಬಿಡದು. (ಅಂದರೆ) ಆಶಾಪರಿತ್ಯಾಗವೇ ಮೋಕ್ಷ ಪ್ರಾಪ್ತಿಗೆ ಮುಖ್ಯ ಕಾರಣವೆಂದು ಹಸ್ತಾಮಲಕಾಚಾರ್ಯಾಭಿಪ್ರಾಯವು.

ಶ್ಲೋ॥ ಅಗ್ರೇವಹ್ನಿಃಪೃಷ್ಠೆ ಭಾನೂರಾತೌ್ರಚುಬುಕಸಮರ್ಪಿತಜಾನುಃ । ಕರತಲಭಿಕ್ಷಸ್ತರುತಲವಾಸಸ್ತದಪಿನಮುಂಚತ್ಯಾಶಾಪಾಶಃ॥ ॥ ೪ ॥

ಟೀ॥ ಯಸ್ಯ–ಯಾವ ಮನುಷ್ಯನಿಗೆ, ಅಗ್ರೆ–ಯದುರುಭಾಗದಲ್ಲಿ, ವಹ್ನಿಃ–ಅಗ್ನಿಹೋತ್ರವು ಯಿರುತ್ತದೆಯೋ, ಯಸ್ಯ–ಯಾವ ಪುರುಷನಿಗೆ, ಪೃಷ್ಟೆ–ಹಿಂಭಾಗದಲ್ಲಿ, ಭಾನುಃ–ಸೂರ್ಯನು ಯಿರುತ್ತಾನೋ, ಯಃ–ಯಾವ ಪುರುಷನು, ರಾತೌ್ರ–ರಾತ್ರಿಯಲ್ಲಿ, ಚುಬುಕಸಮರ್ಪಿತಜಾನುಃ–ಚುಬುಕ–ಗಡ್ಡದಲ್ಲಿ, ಸಮರ್ಪಿತ–ಚನ್ನಾಗಿ ಇರಿಸಲ್ಪಟ್ಟ, ಜಾನುಃ–ಮೊಣಕಾಲುಗಳು ಉಳ್ಳವನಾಗಿ ಆಗುತ್ತಾನೋ, (ಅಂದರೆ) ಸರ್ವವನ್ನು ಪರಿತ್ಯಾಗ ಮಾಡಿದವನಿಗೆ ವಸ್ತ್ರಾದಿಗಳು ಯಿಲ್ಲದ್ದರಿಂದ ಮೇಲೆ ಹೇಳಿದ ಅಗ್ನಿ ಹೋತ್ರಾದಿಗಳು ಮೂರುನ್ನೂ ಸೀತ ನಿವಾರಣವಾದ್ದೆಂದು ತಾತ್ಪರ್ಯವು. ಯಃ–ಯಾವ ಪುರುಷನು, ಕರತಲಭಿಕ್ಷಃ–ಪಾತ್ರೆ ಇಲ್ಲದ್ದರಿಂದ ಅಂಗೈಯಿಂದ ಭಿಕ್ಷವನ್ನ ಯೆತ್ತುವನು ಆಗುತ್ತಾನೋ, ಯಃ–ಯಾವನು, ತರುತಲವಾಸಃ–ತರುತಲ–ವೃಕ್ಷ ಮೂಲದಲ್ಲಿ, ವಾಸಃ–ವಾಸಸ್ತನಾಗಿ ಇರುತ್ತಾನೋ, ತಂ–ಅಂಥಾವನನ್ನು, ತದಪಿ–ಮೇಲೆ ಹೇಳಿದ ಪ್ರಾರಿಗೆ ಅತ್ಯಂತ ವಿಷಯ ಸಂಕೋಚವನ್ನ ಹೊಂದಿ ಇದ್ದಾಗ್ಯೂ, ಆಶಾಪಾಶಃ–ಪಾಶದೋಪಾದಿಯಲ್ಲಿ ಬಿಡದೆ ತಗಿಲಿಕೊಂಡು ಇರುವ ಪುತ್ರಮಿತ್ರ ಕಳತ್ರಗಳಲ್ಲುಂಟಾದ ದುರಾಶೆಯೂ, ನಮುಂಚತಿ–ಬಿಡುವದಿಲ್ಲ (ಅಂದರೆ) ಎಂಥಾ ವರಿಗಾದರೂ ಆಶೆ ಬಿಡುವದಿಲ್ಲವೆಂದು ಹಸ್ತಾಮಲಕಾಚಾರ್ಯರಾಭಿಪ್ರಾಯವು.

॥ ವಾರ್ತಿಕಕಾರಃ ॥

ಶ್ಲೋ॥ ಕುರುತೆಗಂಗಾಸಾಗರಗಮನಂವ್ರತಪರಿಪಾಲನಮಥ ವಾದಾನಂ । ಜ್ಞಾನವಿಹೀನಸ್ಸರ್ವಮತೆನಮುಕ್ತಿಂನಭಜತಿಜನ್ಮ ಶತೆನ॥ ॥ ೯ ॥

ಟೀ॥ ಯಃ–ಯಾವನು, ಗಂಗಾಸಾಗರಗಮನಂ–ಗಂಗಾ–ಗಂಗೆಯನ್ನ ಕುರಿತು, ಸಾಗರ–ಸಮುದ್ರವನ್ನ ಕುರಿತು, ಗಮನಂ–ಪ್ರಯಾಣವನ್ನ, ಕುರುತೆ–ಮಾಡುತ್ತಾನೋ (ಅಂದರೆ) ಗಂಗಾಯಾತ್ರೆ ಸೇತುಯಾತ್ರೆ ಮೊದಲಾದ ತೀರ್ಥಯಾತ್ರೆ ಹೋಗುತ್ತಾನೆಂದು ಅರ್ಥವು. ಯಃ–ಯಾವನು, ವ್ರತಪರಿಪಾಲನಂ–ವ್ರತ–ನಿತ್ಯನೈಮಿತ್ತಿಕ ವ್ರತಗಳ, ಪರಿಪಾಲನಂ–ಯಥಾವಿಧಿಯಾಗಿ ಮಾಡೋಣವನ್ನ, ಕುರುತೆ–ಮಾಡುತ್ತಾನೋ, ಅಥವಾ ದೇಹಪ್ರಯಾಸ ಸಾಧ್ಯವಾದ ವ್ರತಾನುಷ್ಠಾನವನ್ನ ಮಾಡದೆ ಇದ್ದಪಕ್ಷದಲ್ಲಿ, ದಾನಂ–ಸರ್ವ ಪಾಪಕ್ಷಯವನ್ನಮಾಡಿ ಶಾಶ್ವತ ಸ್ವರ್ಗವನ್ನ ಉಂಟು ಮಾಡುವ ಮಹಾದಾನವನ್ನ, ಕುರುತೆ–ಮಾಡುತ್ತಾನೋ, ಸಃ–ಆ ಪುರುಷನು, ಜ್ಞಾನವಿಹೀನಶ್ಚೆತ್–ಪರಮಾರ್ಥ ಪರಿಜ್ಞಾನವಿಲ್ಲದ ಕೇವಲಪಾಮರನಾದರೆ, ಸರ್ವಮತೆನ–ಸಮಸ್ತ ಮತಗಳ ಅಂಗೀಕಾರದೊಡನೆ, ಜನ್ಮಶತೆನ–ನೂರು ಜನ್ಮಗಳಿಗೂ, ಮುಕ್ತಿಂ–ಮೋಕ್ಷವನ್ನ, ನಭಜತಿ–ಹೊಂದುವದಿಲ್ಲ, (ಅಂದರೆ) ಜ್ಞಾನಸಹಿತ ಕರ್ಮಗಳೇ ಫಲಉಳ್ಳದ್ದಾಗಿಯೂ ಕೇವಲ ಕರ್ಮಗಳಿಗೆ ಫಲವಿಲ್ಲದೆ ಇರುವದೆಂದೂ ವಾರ್ತಿಕಕಾರಾಭಿಪ್ರಾಯವು.

॥ ನಿತ್ಯಾನಂದಃ ॥

ಶ್ಲೋ॥ ಸುರಮಂದಿರತರುಮೂಲನಿವಾಸಶ್ಶಯ್ಯಾಭೂತಲಮಜಿನಂವಾಸಃ । ಸರ್ವಪರಿಗ್ರಹಭೋಗತ್ಯಾಗಃಕಸ್ಯಸುಖಂನಕರೊತಿವಿರಾಗಃ॥ ॥ ೬ ॥

ಟೀ ॥ ಸುರಮಂದಿರತರುಮೂಲನಿವಾಸಃ–ಸುರಮಂದಿರ–

ಸ್ವರ್ಗದೊಡನೆ ಸದೃಶವಾದ, ತರುಮೂಲ-ವೃಕ್ಷಮೂಲದಲ್ಲಿ, ನಿವಾಸಃ—ಇರೋಣವು, ಭೂತಲಂ—ಭೂಪ್ರದೇಶವೆಂಬ, ಶಯ್ಯಾ—ಹಾಸಿಗೆಯೂ, ಅಜಿನಂ—ಕೃಷ್ಣಾಜಿನ ಮೊದಲಾದ ಚರ್ಮವೆಂಬ, ವಾಸಃ—ವಸ್ತ್ರವು, ಸರ್ವಪರಿಗ್ರಹಭೋಗತ್ಯಾಗಃ—ಸರ್ವ—ಸಮಸ್ತವಾದ, ಪರಿಗ್ರಹ—ಪುತ್ರ ಮಿತ್ರ ಕಳತ್ರ ದಾಸೀ ದಾಸಾದಿ ಪರಿಜನದ್ದೆಶೆಯಿಂದ ಉಂಟಾಗುವ, ಭೋಗ—ವಿಷಯ ಸೌಖ್ಯದ, ತ್ಯಾಗಃ—ಮನೋವಾಕ್ಕಾಯಗಳಿಂದ ಬಿಡೋಣವು, ಯಸ್ಮಿನ್ಸತಿ—ಯಾವ ವಿರಾಗವು ಉಂಟಾಗಲಾಗಿ, ಭವತಿ-ಆಗುತ್ತಿಧೆಯೋ, ಸಃ—ಅಂಥಾ, ವಿರಾಗಃ—ವಿರಾಗವು, ಕಸ್ಯ—ಯಾವನಿಗೆ, ಸುಖಂ—ನಿರಂತರಾನಂದವನ್ನು, ನಕರೊತಿ—ಮಾಡುವದಿಲ್ಲ, ಸರ್ವ ವಿಷಯೆಚಾ ಪರಿತ್ಯಾಗವೇ ನಿತ್ಯಾನಂದ ರೂಪಕವಾದ ಮೋಕ್ಷವೆಂದು ನಿತ್ಯಾನಂದಾಭಿಪ್ರಾಯವು. ಜ್ಞಾನವಾಸಿಷ್ಟದಲ್ಲಿ ಇದೇ ತಾತ್ಪರ್ಯವು,—ವಾಸನಾತಾನವಂರಾಮವೊಕ್ಷಇತ್ಯಭಿಧೀಯ್ಯತೆ, । ಈ ಶ್ಲೋಕಾರ್ಥವನ್ನು ತಿಳಯಿಸುತ್ತಿದೆ.

॥ ಆನಂದಗಿರಿಃ ॥

ಶ್ಲೋ॥ ಯೊಗರತೊವಾಭೊಗರತೊವಾಸಂಗರತೊವಾ
ಸಂಗವಿಹೀನಃ । ಯಸ್ಯಬ್ರಂಹಣಿರಮತೆಚಿತ್ತಂನಂದತಿನಂ
ದತಿನಂದತ್ಯೆವ ॥ ॥ ೭ ॥

ಟೀ॥ ಯೊಗರತೊವಾ-ಯೊಗ-ಮಂತ್ರಯೋಗ ಮೊದಲಾದ ಯೋಗಗಳಲ್ಲಿ, ರತೊವಾ—ಆಸಕ್ತಿ ಉಳ್ಳದ್ದಾಗಿ ತೋರುವನಾದಾಗ್ಯೂ, ಭೊಗರತೊವಾ ಭೊಗ—ಸ್ರಕ್ಚಂದನವ ನಿತಾದ್ಯನುಭವದಲ್ಲಿ, ರತೊವಾ—ಅಭಿಲಾಷೆಯುಳ್ಳದ್ದಾಗಿ ತೋರುವನಾದಾಗ್ಯೂ, ಸಂಗರತೋವಾ ಸಂಗ-ಪುತ್ರಮಿತ್ರಾದಿ ಜನಗೋಷ್ಟಿಯಲ್ಲಿ ಅನುರಕ್ತಿಯುಳ್ಳದ್ದಾಗಿ ತೋರುವನಾದಾಗ್ಯೂ, ಸಂಗವಿಹೀನೋವ—ಸಂಬಂಧ ರಹಿತನಾಗಿ ಇರುವ ಮೇರಿಗೆ

ತೋರುವನಾದಾಗ್ಯೂ, ಯಸ್ಯ—ಯಾವ ಮನುಷ್ಯನ, ಚಿತ್ತಂ—ಮನಸ್ಸು, ಬ್ರಹ್ಮಣಿ—ಅವಸ್ಥಾತ್ರಯ ಸಾಕ್ಷಿಯಾಗಿ ಇರುವ ಸರ್ವ ಪರಿಪೂರ್ಣವಸ್ತುವಿನಲ್ಲಿ, ರಮತೇ—ಐಕ್ಯವಾದ್ದರಿಂದ ಆನಂದವನ್ನ ಹೊಂದುತ್ತಿಧೆಯೋ, ಸಃ—ಆ ಪುರುಷನು, ನಂದತಿನಂದತಿನಂದತ್ಯೇವ—ಯಾವಾಗ್ಯೂ ಆನಂದ ಸ್ವರೂಪಿಯಾಗಿಯೇ ಇರುತ್ತಾನೆ (ಅಂದರೆ) ಮನೋಕ್ಷಯವೇ ಮೋಕ್ಷವೆಂದುನ್ನೂ ಮನೋವಿಕಾರವೇ ಪ್ರಪಂಚವೆಂದುನ್ನೂ, ಆನಂದಗಿರ್ಯಾಚಾರ್ಯರಂಭಿಪ್ರಾಯವು

॥ ದೃಢಭಕ್ತಃ ॥

ಶ್ಲೋ॥ ಭಗವದ್ಗೀತಾಕಿಂಚದಧೀತಾಗಂಗಾಜಲಲವಕಣಿಕಾ
ಪೀತಾ । ಸಕೃದಪಿಯೇನಮುರಾರಿಸಮರ್ಚಾಕ್ರಿಯತೆತಸ್ಯ
ಯಮೋಪಿನಚರ್ಚಾಂ॥ ॥ ೮ ॥

ಟೀ॥ ಯೇನ—ಯಾವ ಪುರುಷನಿಂದ, ಭಗವದ್ಗೀತಾ—ಶ್ರೀಕೃಷ್ಣ ಮೂರ್ತಿ ಅರ್ಜುನನಿಗೆ ಉಪದೇಶ ಮಾಡಿದ ಪರಮಾರ್ಥ ಪ್ರತಿಪಾದಕವಾದ ಗ್ರಂಥವು, ಕಿಂಚಿದಪಿ—ಸ್ವಲ್ಪವಾದರೂ, ಅಧೀತಾ— ಸದ್ಗುರೂಪದೇಶ ಮೂಲಕವಾಗಿ ತಿಳಿಯಲ್ಪಟ್ಟಿಧೆಯೋ, ಯೇನ—ಯಾವನಿಂದಾ, ಗಂಗಾಜಲಲವಕಣಿಕಾಪೀತ—ಗಂಗಾ—ಗಂಗಾನದಿಯ, ಜಲಲವಕಣಿಕಾಪೀತ-ಅಲ್ಪ ಜಲಕಣವಾದರೂ, ಪೀತಾ—ಮಹಿಮೆಯನ್ನರಿತು ಅಂತ್ಯಕಾಲದಲ್ಲಿ ಪಾನ ಮಾಡಲ್ಪಡುತ್ತೋ, ಯೇನ—ಯಾವನಿಂದ, ಮುರಾರಿಸಮರ್ಚಾ—ಮುರಾರಿ—ಶ್ರೀಮನ್ನಾರಾಯಣ ಮೂರ್ತಿಯ, ಸಮರ್ಚಾ—ಅಚಂಚಲ ಭಕ್ತಿಯಿಂದ ಯಥಾ ಶಾಸ್ತ್ರ ವಿಹಿತವಾದ ಆರಾಧನೆಯೂ, ಸಕೃದಪಿ—ಒಂದು ಕಾಲದಲ್ಲಾದರೂ, ಕ್ರಿಯತೆ—ಮಾಡಲ್ಪಡುತ್ತೋ, ತಸ್ಯ—ಆ ಪುರುಷಗೆ, ಚರ್ಚಾಂ—ಪುಣ್ಯ ಪಾಪ ವಿಮರ್ಶೆಯನ್ನ, ಯಮೋಪಿ—ಯಮಧರ್ಮರಾಯನೂ ಕೂಡಾ, ನಕರೊತಿ—ಮಾಡುವದಿಲ್ಲ.

(ಅಂದರೆ) ವೇದಾಂತ ವಿಚಾರವನ್ನೂ, ಮಹಾ ನದೀ ಸ್ನಾನವನ್ನೂ, ಅಚಂಚಲ ಭಕ್ತಿಯಿಂದ ಮಾಡುವ ಭಗವದಾರಾಧನೆಯನ್ನೂ—ಮೋಕ್ಷಾವಾಪ್ತೀಗೆ ಸಾಧಕಗಳೆಂದು ದೃಢಭಕ್ತನಅಭಿಪ್ರಾಯವು.

|| ನಿತ್ಯನಾಥಃ ||

ಶ್ಲೋ|| ಪುನರಪಿಜನನಂಪುನರಪಿಮರಣಂಪುನರಪಿಜನನೀ
ಜಠರೆಶಯನಂ | ಇಹಸಂಸಾರೆಬಹುದುಸ್ತಾರೆಕೃಪಯಾ
ಪಾರೆಪಾಹಿಮುರಾರೆ || || ೯ ||

ಟೀ|| ಬಹು—ಯಾವ ವಿಧವಾಗಿಯೂ, ದುಸ್ತಾರೆ—ಕಡತೀರುವದಕ್ಕೆ ಅಶಕ್ಯವಾದ, ಅಪಾರೆ—ಅಪರಿಮಿತವಾದ, ಇಹ ಸಂಸಾರೆ—ಕುಲಾಲಚಕ್ರಧೋಪಾದಿಯಲ್ಲಿ ಜನನ ಮರಣಾದಿಗಳ ದೆಶೆಯಿಂದ ಬಿಡದೆ ತಿರುಗುತ್ತಿರುವ ಈ ಸಂಸಾರದಲ್ಲಿ, ಪುನರಪಿ—ಮೃತಿಯನ್ನ ಹೊಂದಿದ ತರುವಾಯ, ಜನನಂ—ಕರ್ಮಾನುಸಾರವಾಗಿ ಹುಟ್ಟೋಣವುನ್ನೂ, ಪುನರಪಿ—ಜನಿಸಿದ ತರುವಾಯು—ಮತ್ತು ಮರಣಂ—ಮೃತಿಯನ್ನ ಹೊಂದೋಣವನ್ನೂ, ಪುನರಪಿ—ಮತ್ತೂ ಕೂಡಾ, ಜನನೀಜಠರೆ—ಜನನೀ—ತಾಯಿಯ, ಜಠರೆ—ಉದರದಲ್ಲಿ, ಶಯನಂ—ವಾಸ ಮಾಡಿಕೊಂಡು ಇರೋಣವನ್ನೂ, ಸಂಭವತಿ—ಉಂಟಾಗುತ್ತಧೆ. ಆದ್ದರಿಂದ, ಕೃಪಯಾ—ಆಶ್ರಿತವಾತ್ಸಲ್ಯದಿಂದ, ಮುರಾರೆ—ಮುರಾರನೆಂಬ ರಾಕ್ಷಸನಿಗೆ ಶತೃವಾದ ಶ್ರೀಮನ್ನಾರಾಯಣ ಮೂರ್ತಿಯೇ, ಪಾಹಿ—ರಕ್ಷಿಸು (ಅಂದರೆ) ಸಂಸಾರ ನಿವೃತ್ತಿಗೂ—ಮೋಕ್ಷಾವ್ಯಾಪ್ತಿಗೂ ಭಕ್ತಿ ಮಾರ್ಗವೇ ಉತ್ತಮವೆಂದು ನಿತ್ಯನಾಥಾಭಿಪ್ರಾಯವು.

|| ಯೊಗಾನಂದಃ ||

ಶ್ಲೋ || ರಥ್ಯಾಕರ್ಪಟವಿರಚಿತಕಂಥಃಪುಣ್ಯಾಪುಣ್ಯವಿವ
ರ್ಜಿತಪಂಥಾಃ | ಯೊಗೀಯೊಗನಿಯೊಜಿತಚಿತ್ತೊರಮ
ತೆಬಾಲೊನ್ಮತ್ತವದೆವ || || ೧೦ ||

ಟೀ॥ ರಥ್ಯಾ—ರಾಜ ಮಾರ್ಗದಲ್ಲಿರುವ, ಕರ್ಪಟ—ಚಿಂದೀ ಒಟ್ಟೆಗಳಿಂದ, ವಿರಚಿತ-ಮಾಡಲ್ಪಟ್ಟ, ಕಂಥಃ—ಬಂತೆಯುಳ್ಳಂಥಾ, ಪುಣ್ಯಾಪುಣ್ಯವಿವರ್ಜಿತಪಂಥಾಃ-ಪುಣ್ಯಾಪುಣ್ಯ-ಪುಣ್ಯ ಪಾಪಗಳಿಂದ (ಅಂದರೆ) ವಿಧಿನಿಷೇಧಗಳಿಂದ, ವಿವರ್ಜಿತ—ಬಿಡಲ್ಪಟ್ಟ, ಪಂಥಾಃ—ಮಾರ್ಗವುಳ್ಳಂಥಾ, ಬಾಲೋನ್ಮತ್ತವ ದೇವ—ಸ್ಥಿತಃ—ಐದು ಸಂವತ್ಸರ ವಯಸ್ಸಿಗೆ ಮೀರದ ಮೊಗುವಿನೋಪಾದಿಯಲ್ಲಿ ಇರುವ—ಹುಚ್ಚನೋಪಾದಿಯಲ್ಲಿರುವ, ಯೋಗೀ—ಯೋಗನಿಷ್ಠನು, ಯೋಗನಿಯೋಜಿತಚಿತ್ತಃ—ಯೋಗ—ಬ್ರಹ್ಮಸ್ವರೂಪಾನುಸಂಧಾನದಲ್ಲಿ, ನಿಯೋಜಿತ—ಚನ್ನಾಗಿ ಇರಸಲ್ಪಟ್ಟ, ಚಿತ್ತಃ—ಮನುಸ್ಸುವುಳ್ಳವನಾಗಿ, ರಮತೇ—ಆನಂದವನ್ನ ಹೊಂದುತ್ತಾನೆ. (ಅಂದರೆ) ವಿಧಿನಿಷೇಧಗಳಿಲ್ಲದೆ ಹುಚ್ಚನೋಪಾದಿಯಲ್ಲಿ ತಿರುಗುತ್ತಾ ಸರ್ವಸಂಗ ರಹಿತನಾಗಿ ಬ್ರಹ್ಮಾನುಸಂಧಾನವನ್ನ ಮಾಡುತ್ತಾ ಇರುವವನು ಬ್ರಹ್ಮನಿಷ್ಠನೆಂದು ಯೋಗಾನಂದಾಭಿಪ್ರಾಯವು.

॥ ಸುರೇಂದ್ರಃ ॥

ಶ್ಲೋ॥ ಕಸ್ತ್ವಂಕೋಹಂಕುತಆಯಾತಃಕಾಮೇಜನನೀಕೋ
ಮೇತಾತಃ । ಇತಿಪರಿಭಾವಿತನಿಜಸಂಸಾರಸ್ಸರ್ವಂತ್ಯಕ್ತ್ವಾ
ಸ್ವಪ್ನವಿಚಾರಃ ॥ ॥ ೧೧ ॥

ಟೀ॥ ತ್ವಂ—ನಿನಗಿಂತ ಪ್ರತ್ಯೇಕವಾಗಿರುವ ನೀನು, ಕಃ—ಯಾವನು, ಅಹಂ—ನಿನಗಿಂತಲು ಬೇರೆಯಾಗಿರುವ ನಾನು, ಕಃ—ಯಾವನು, ಆಯಾತಃ—ಬಂದೆವು, ಮೇ—ನನ್ನ—ಜನನೀ—ತಾಯಿಯು, ಕ್ವಾ—ಯಾವಳು, ಮೇ—ನನ್ನ, ತಾತಃ—ತಂದೆಯು ಕಃ—ಯಾವನು, ಇತಿ—ಈ ರೀತಿಯಾಗಿ, ಪರಿಭಾವಿತ ನಿಜ ಸಂಸಾರಃ—ಪರಿಭಾವಿತ—ಚನ್ನಾಗಿ ಮೂಲ ವಿಚಾರವನ್ನ ಮಾಡಿ—ವಿಮರ್ಶೆ ಮಾಡಲ್ಪಟ್ಟ, ನಿಜ—ಸ್ವಕೀಯ್ಯವಾದ, ಸಂಸಾರಃ—ಆತ್ಮ ಸುಹೃಜ್ಜನನೀ ಪ್ರಭೃತಿಗಳೆಲ್ಲರನನ್ನೂ, ತ್ಯ

ಕ್ತ್ವಾ—ಬಿಟ್ಟು, ಸ್ಥಿತಶ್ಚೇತ್—ಇದ್ದವನಾದರೆ, ಸ್ವಪ್ನ ವಿಚಾರಃ—ಸ್ವಪ್ನ—ಕನಸಿನಲ್ಲಿ ಕಂಡ ಪದಾರ್ಥಗಳಲ್ಲಿ ಉಳ್ಳ ಮಿಥ್ಯಾಜ್ಞಾನದೋಷಾದಿಯಲ್ಲಿ, ವಿಚಾರಃ—ವಿಮರ್ಶೆಯು (ಅಂದರೆ) ತತ್ವಜ್ಞಾನವು, ಜಾಯತೆ—ಆಗುತ್ತದೆ (ಅಂದರೆ) ಮೂಲ ವಿಮರ್ಶೆ ಮಾಡಲಾಗಿ ತಾಯಿ ಮೊದಲಾದ ಎಲ್ಲರುನ್ನೂ ಮಿಥ್ಯಾಭೂತರಾಗುತ್ತಾರೆಂದು ಸುರೇಂದ್ರಾಭಿಪ್ರಾಯವು.

|| ಮೇಧಾತಿಥಿಃ ||

ಶ್ಲೋ|| ತ್ವಯಿಮಯಿಸರ್ವತ್ರೈಕೋವಿಷ್ಣುಃವ್ಯರ್ಥಂಕು
ಪ್ಯಸಿಮಯ್ಯಸಹಿಷ್ಣುಃ| ಭವಸಮಚಿತ್ತಸ್ಸರ್ವತ್ರತ್ವಂವಾಂ
ಛಸ್ಯಚಿರಾದ್ಯದಿವಿಷ್ಣುತ್ವಂ|| || ೧೦ ||

ಟೀ|| ತ್ವಯಿ—ಯೆದುರಾಗಿ ಕೂತುಕೊಂಡ ನಿನ್ನಲ್ಲಿಯು, ಮಯಿ—ಹೇಳುತ್ತಿರುವ ನನ್ನಲ್ಲಿಯು, ಸರ್ವತ್ರ—ಎಲ್ಲಾಕಡೆಯಲ್ಲಿಯು—ವಿಷ್ಣುಃ—ಸರ್ವವ್ಯಾಪಕನಾದ ಪರಮಾತ್ಮನು, ಏಕಃ—ವೊಬ್ಬನನ್ನು, ಮಯಿ_ನಿನಗಿಂತಲೂ ಇತರನೆಂದು ತಿಳದ ನನ್ನ ವಿಷಯದಲ್ಲಿ, ವ್ಯರ್ಥಂ—ನಿಷ್ಪ್ರಯೋಜನವಾಗಿ, ಅಸಹಿಷ್ಣುಃ—ಅಸೂಯಾದಿ ದುರ್ಗುಣಗಳಿಂದ ವೊಪ್ಪರ್ಜದೆ ಇರುವನಾಗಿ, ಭವಸಿ—ಆಗುತ್ತೀ; ಅಚಿರಾತ್—ತ್ವರೆಯಾಗಿ, ವಿಷ್ಣುತ್ವಂ—ಸರ್ವವ್ಯಾಪಕನಾದ ಪರಮಾತ್ಮ ಸ್ವರೂಪ ಆಗೋಣತನವನ್ನ, (ಅಂದರೆ) ಮುಕ್ತಿಯನ್ನ, ವಾಂಛಸಿ—ಕೋರಿದವನಾದರೆ, ಸರ್ವತ್ರ—ಸಮಸ್ತ ಜೀವ ಕೋಟಿಯಲ್ಲಿಯು, ಸಮಚಿತ್ತಃ—ಸಮಾನವಾದ ಬುದ್ಧಿಯುಳ್ಳವನು, ಭವ-ಆಗು, (ಅಂದರೆ) ಶುನಿಚೈವಶ್ವಪಾಕೇಚ ಪಂಡಿತಾಸ್ಸಮದರ್ಶಿನಃ—ಯೆಂದು ಭಗವದ್ವಾಕ್ಯಭೋಧಾದಿಯಲ್ಲಿ ಸರ್ವ ಭೂತಗಳಲ್ಲಿ ಸಮಬುದ್ಧಿಯುಂಟಾಗಿ ಬ್ರಹ್ಮವಿಚಾರ ಮಾಡೋಣವು ಮೋಕ್ಷಸಾಧನವೆಂದು ಮೇಧಾತಿಥ್ಯಾಭಿಪ್ರಾಯವು.

|| ಭಾರತೀವಂಶಃ ||

ಶ್ಲೋ|| ಕಾಮಂಕ್ರೋಧಂಲೋಭಂಮೋಹಂತ್ಯಕ್ತ್ವಾತ್ಮಾನಂ ಪಶ್ಯವಿಮೋಹಂ। ಆತ್ಮಜ್ಞಾನವಿಹೀನಾಮೂಢಾಸ್ತೆಪಚ್ಯಂತೆನರಕನಿಗೂಢಾಃ ॥ || ೧೩ ||

ಟೀ|| ಕಾಮಂ—ಕೋರುತ್ತಿರುವ ಮನೋಧರ್ಮವನ್ನು, ಕ್ರೋಧಂ—ದ್ವೇಷಿಸುವ ಮನೋಧರ್ಮವನ್ನು, ಲೋಭಂ—ಅತ್ಯಾಶೆ ಬೀಳುವ, ವ್ಯಯಮಾಡದೆ ಇರುವ ಮನೋಧರ್ಮವನ್ನು, ತ್ಯಕ್ತ್ವಾ-ಬಿಟ್ಟು, ಅವಿಮೋಹಂ-ಅಜ್ಞಾನರಹಿತನಾದ, ಆತ್ಮಾನಂ-ಪರಮಾತ್ಮನನ್ನು, ಪಶ್ಯ—ನೋಡು, ಆತ್ಮಜ್ಞಾನವಿಹೀನಾಃ-ತತ್ವ ಪರಿಜ್ಞಾನವಿಲ್ಲದ, ಮೂಢಾಃ—ತಿಳುವಳಿಕೆ ಇಲ್ಲದ ಜನರು, ನರಕನಿಗೂಢಾಸ್ಸಂತಃ—ನರಕದಲ್ಲಿ ಬೀಳಿಸಲ್ಪಟ್ಟವರಾಗಿ, ಪಚ್ಯಂತೆ—ಯಮ ಭಟರಿಂದ ಉಪದ್ರವ ಬೀಳುತ್ತಾ ಇರುತ್ತಾರೆ (ಅಂದರೆ) ರಜ್ಜುವಿನಲ್ಲಿ ತೋರುವ ಸರ್ಪಭ್ರಾಂತಿಯೋಪಾದಿಯಲ್ಲಿ ಪರಮಾತ್ಮನಲ್ಲಿ ತೋರುವ ಜೀವಭ್ರಾಂತಿಯನ್ನು ಬಿಡದೆ ಮೋಕ್ಷ ಉಂಟಾಗಲಾರದೆಂದುನ್ನು, ಹಾಗೆ ಮೋಕ್ಷಸಾಧನವಾದ ಆತ್ಮಾನಾತ್ಮ ವಿವೇಕವಿಲ್ಲದವರಿಗೆ ಜನ್ಮ ಪರಂಪರೆಗಳು ಬಿಡದೆ ಇದ್ದದ್ದರಿಂದ ನಿರಂತರವನ್ನೂ ನರಕ ಪ್ರಾಪ್ತಿಯುಂಟಾಗುತ್ತೆಂದು ಭಾರತೀವಂಶನಭಿಪ್ರಾಯವು.

|| ಸುಮತಿಃ ||

ಶ್ಲೋ|| ಗೆಯಂಗೀತಾನಾಮಸಹಸ್ರಂಧ್ಯೇಯಂಶ್ರೀಪತಿರೂಪಮಜಸ್ರಂ। ನೆಯಂಸಜ್ಜನಸಂಗತಮನಿಶಂದೆಯಂದೀನಜನಾಯಚವಿತ್ತಂ॥ || ೧೪ ||

ಟೀ || ಗೀತಾನಾಮಸಹಸ್ರಂ—ಗೀತಾ—ಭಗವದ್ಗೀತೆಯನ್ನು, ನಾಮಸಹಸ್ರಂ—ಪರಮೇಶ್ವರನು ಪಾರ್ವತೀದೇವಿಗೆ ಉಪದೇಶಿಸಿದ ಶ್ರೀವಿಷ್ಣುಸಹಸ್ರನಾಮವನ್ನು, ಗೆಯಂ—ಸದ್ಗುರುಮೂಲಕ ಚನ್ನಾಗಿ ತಿಳದುಕೊಂಡು ಪಾರಾಯಣ ಮಾಡಬೇಕು. ಶ್ರೀಪತಿರೂಪಂ—ಲಕ್ಷ್ಮೀಪತಿಯಾದ ಶ್ರೀಮನ್ನಾರಾ

ಯಣಮೂರ್ತಿ ದಿವ್ಯಸ್ವರೂಪವು, ಧ್ಯೇಯಂ-ಆಚಾರ್ಯೋಪ ದೇಶಾನುಸಾರ ಹೃದಯದಲ್ಲಿ ಧ್ಯಾನ ಮಾಡ ಬೇಕು, ಸಜ್ಜನ ಸಂಗತಂ-ಸತ್ಪುರುಷರ ಸಹವಾಸವು. ಅನಿಶಂ-ಯಾವಾಗಲೂ, ನೇಯಂ-ಹೊಂದಿಸತಕ್ಕದ್ದು, ದೀನಜನಾಯ—ದರಿದ್ರ ಜನರಿಗೋಸ್ಕರ, ವಿತ್ತಂ-ದ್ರವ್ಯವನ್ನು, ದೇಯಂ—ಕೊಡತಕ್ಕದ್ದು, ಅಂದ ರೆ) ವೇದಾಂತಾರ್ಥ ವಿಚಾರವನ್ನ ಆತ್ಮಸ್ವರೂಪಾನು ಸಂಧಾನವನ್ನು, ಸರ್ವ ಭೂತಗಳಲ್ಲಿ ಸಮ ಬುದ್ಧಿ ಇರೋಣ ವನ್ನು, ಮೋಕ್ಷ ಸಾಧನವೆಂದು ಸುಮತಿ ಅಭಿಪ್ರಾಯವು.

ಶ್ಲೋ॥ ಮೂಢಃಕಶ್ಚನವೈಯ್ಯಾಕರಣೋಡುಕೃಞಿಕರಣಾ ಧ್ಯಯನಧುರೀಣಃ । ಶ್ರೀಮುಚ್ಛಂಕರಭಗವಚ್ಛಿಷ್ಯೈರ್ಬೋಧಿತಆಸೀಚ್ಛೋಧಿತಕರಣಃ ॥ ॥ ೧೪ ॥

ಟೀ॥ ಮೂಢಃ—ವೇದಾಂತ ಶ್ರವಣಾದಿಗಳಿಲ್ಲದೆ ಇರುವದ್ದರಿಂದ, ಆತ್ಮ ಸ್ವರೂಪಾನುಭವವಿಲ್ಲದವನಾಗಿಯು, ಡುಕೃಞಿಕರಣಾಧ್ಯಯನಧುರೀಣಃ-ಡುಕೃಞಿಕರಣ—ಡುಕೃಞಿಕರಣೆಯೆಂಬ ವ್ಯಾಕರಣ ಶಾಸ್ತ್ರದಲ್ಲಿರುವ ಮಾತಿನ, ಅಧ್ಯಯನ-ಪಠನೆ ಮಾಡುವದರಲ್ಲಿ, ಧುರೀಣಃ—ಅತಿ ಸಮರ್ಥನಾಗಿರುವ, ಕಶ್ಚನವೈಯ್ಯಾಕರಣಃ-ವ್ಯಾಕರಣ ಶಾಸ್ತ್ರವನ್ನೋದಿದ ಒಬ್ಬಾನೊಬ್ಬ ಪಂಡಿತನು, ಶ್ರೀಮುಚ್ಛಂಕರಭಗವಚ್ಛಿಷ್ಯೈಃ-ಪೂಜ್ಯರಾದ ಶ್ರೀಮುಚ್ಛಂಕರಾಚಾರ್ಯರ ೧೪ ಮಂದಿ ಶಿಷ್ಯರಿಂದ, ಬೋಧಿತಃ-ಉಪದೇಶರೂಪವಾಗಿ ಪರಮಾರ್ಥವನ್ನ ಬೋಧಿಸಲ್ಪಟ್ಟವನಾಗಿ, ಶೋಧಿತಕರಣಃ—ಶೋಧಿತ-ಸ್ವರೂಪಾನುಸಂಧಾನದ್ದೆಶೆಯಿಂದ ನಿರ್ಮಲವಾಗಿ ಮಾಡಲ್ಪಟ್ಟ, ಕರಣಃ—ಅಂತಃಕರಣವುಳ್ಳವನಾಗಿ, ಆಸೀತ್-ಆದನು.

ಇತಿಶ್ರೀಗುರುಶಂಕರವಿಜಯೇ—ಶ್ರೀಮುಚ್ಛಂಕರ ಭಗವತ್ಪಾದವೈಯ್ಯಾಕರಣಸಂವಾದೇ ಆಚಾರ್ಯಜ್ಞಪ್ತ ಶಿಷ್ಯೋಪನ್ಯಸ್ತ ಚತುರ್ದಶಮಂಜರಿಕಾಸ್ತೋತ್ರಂ ಸಮಾಪ್ತಂ.

1922 9992

ಶ್ರೀ

ಶ್ರೀಮಚ್ಛಂಕರ ಭಗವತ್ಪಾದಪೂಜ್ಯತತ್ತಚ್ಛಿಷ್ಯ ವಿರಚಿತ

# ದ್ವಾದಶ, ಚತುರ್ದಶಮಂಜರಿಕಾ ಸ್ತೋತ್ರವು.

ಬೆಂಗಳೂರು ಕೋಟೆ ವಾಸಸ್ಥರಾದ

ಶಾಮಾಶಾಸ್ತ್ರಿಗಳವರಿಂದ

ಕನ್ನಡದಲ್ಲಿ ಟೀಕಿಸಲ್ಪಟ್ಟು,

ಕಂ॥ ಸುಬ್ರಹ್ಮಣ್ಯಾವಧಾನಿಗಳಿಗೆ

ಕೊಡಲ್ಪಟ್ಟಿತು.

ಬೆಂಗಳೂರು;

ವೆಸ್ಲಿಯನ್ ಮಿಶನ್ ಪ್ರೆಸ್ನಲ್ಲಿ ಗಾಂಟ್ ಧೊರೆಯಿಂದ ಛಾಪಿಸಿತು.

೧೮೭೧.

ಈ ಪುಸ್ತಕವು—ಬೆಂಗಳೂರಲ್ಲಿರುವ ಮೈಸೂರು ಬುಕ್ ಡಿಪೊ, ಯೇಜಂಟ್—ಅಂಡ್,—ಪಬ್ಲಿಷರ್, ವೆಲನಾಡು. ಬಿ. ಸುಬ್ಬೈಯ್ಯನವರಲ್ಲಿ ಶಿಕ್ಕುತ್ತದೆ.

ಕ್ರಯ ೨ ಆಣೆಗಳು.



